CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೨೮, ೨೦೦೫ (ವೈಶಾಖ ೮, ಶಕ ವರ್ಷ ೧೯೨೭) | ಸಂಚಿಕೆ ೧೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು-27

**ಸಂಖ್ಯೆ: ಬೆಂಗ್ರಾ/ಜಿಕೈಕೇ/ಸಿಎಜಿ-678/2004-05 ದಿನಾಂಕ: 2ನೇ ಏಪ್ರಿಲ್ 2005**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಇಲಾಖೆಯಲ್ಲಿರುವ ಈ ಕೆಳಕಂಡ ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ನಿರುಪಯುಕ್ತ ವಾಹನವೆಂದು ದೃಢೀಕರಣ ನೀಡಿರುವುದರಿಂದ ಇದನ್ನು ದಿನಾಂಕ: 25.5.2005 ರಂದು ಅಪರಾಹ್ನ 3.00 ಗಂಟೆಗೆ ಸರಿಯಾಗಿ ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಒಕ್ಕಲಿಗರ ಭವನ ಬೆಂಗಳೂರು-27 ಇಲ್ಲಿ ವಾಹನ ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿಯೇ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಟೆಂಡರ್ ಕಂ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಟೆಂಡರ್ ಕಂ ಹರಾಜಿನಲ್ಲಿ ಪಾಲ್ಗೊಳ್ಳಬಹುದು. ದಿನಾಂಕ: 30.4.2005 ರಂದು ಹರಾಜು ನಡೆಯದಿದ್ದಲ್ಲಿ ಕ್ರಮವಾಗಿ 7.5.2005 ರಂದು ಇದೇ ಸ್ಥಳದಲ್ಲಿ ನಡೆಸಲಾಗುವುದು.

| ಕ್ರಮ ಸಂಖ್ಯೆ | ವಾಹನದ ವಿವರ | | ಹರಾಜಿನ ದಿನಾಂಕ |
|---|---|---|---|
| 1. | ಸಿಎಜಿ-678 ಅಂಬಾಸಿಡರ್ | Model 1983 | 30.04.2005 |

**ನಿಯಮಗಳು:**

1. ಟೆಂಡರ್‌ನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಅರ್ಜಿದಾರರು ನಿಗದಿತ ನಮೂನೆಯ ಟೆಂಡರ್ ಫಾರಂಗಳನ್ನು ರೂ. 12.00 ಪಾವತಿಸಿ ಪಡೆಯುವುದು. ಪ್ರತಿ ಟೆಂಡರ್‌ಗೆ ರೂ.3,000/- ಗಳನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ (ಹೆಸರಿಗೆ) ಪದನಾಮಕ್ಕೆ ಡಿ.ಡಿ. ತೆಗೆದು ಟೆಂಡರ್ ಜೊತೆಯಲ್ಲಿ ಲಗತ್ತಿಸಿ ಅಥವಾ ಹರಾಜಿಗೆ ಹಾಜರಾಗುವ ಮುನ್ನ ರೂ.3,000/- ಗಳನ್ನು ಇ.ಎಂ.ಡಿ. ಮೂಲಕ ಕಟ್ಟಿ ಭಾಗವಹಿಸುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಹರಾಜು ಪ್ರಾರಂಭವಾಗುವ ಮುನ್ನ ಕಚೇರಿಯ ವೇಳೆಯಲ್ಲಿ ವಾಹನ ಇರುವ ಸ್ಥಳದಲ್ಲಿ ವಾಹನವನ್ನು ಪರೀಕ್ಷಿಸಿ ಸ್ಥಿತಿಗತಿಯನ್ನು ತಪಾಸಣೆ ಮಾಡಿಕೊಂಡು ಖಾತ್ರಿ ಮಾಡಿಕೊಳ್ಳತಕ್ಕದ್ದು. ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
3. ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ಭಾಗ (ಠೇವಣಿ ಹಣವು ಸೇರಿದಂತೆ) ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ (ಎಫ್‌ಡಿಟಿ ಶೇ. 8% ಮತ್ತು ಎಸ್‌ಟಿ 15%) ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಮೂಲ ಬಿಡ್ಡುದಾರರ ಸ್ವಂತ ಖರ್ಚು ಮತ್ತು ಜವಾಬ್ದಾರಿಯ ಮೇರೆಗೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮತು ಹರಾಜಿನಲ್ಲಿ ಆದಂತಹ ನಷ್ಟ ತುಂಬಿ ಕೊಡಲು ಜವಾಬ್ದಾರರಾಗಿರುತ್ತಾರೆ. ತಪ್ಪಿದಲ್ಲಿ ಈ ನಷ್ಟವನ್ನು ಮೂಲ ಬಿಡ್ಡುದಾರರಿಂದ ವಸೂಲು ಮಾಡಲಾಗುವುದು.
4. ಸಂಬಂಧಪಟ್ಟ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾದ ನಂತರ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ/ ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ 60 ದಿನಗಳೊಳಗಾಗಿ ಯಶಸ್ವಿ ಬಿಡ್ಡುದಾರರಿಗೆ/ ಟೆಂಡರ್‌ದಾರರಿಗೆ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರರು/ಟೆಂಡರ್‌ದಾರರು ಉಳಿದ ಹರಾಜಿನ ಮೊತ್ತದ ಹಣವನ್ನು ಸ್ವೀಕೃತಿ ಅರ್ಜಿಯ ಪ್ರತಿ ತಲುಪಿದ 15 ದಿನಗಳೊಳಗಾಗಿ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದಲ್ಲಿ ನಿಬಂಧನೆಯ ಸಂಖ್ಯೆ: 3ರ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಜಂಟಿ ನಿರ್ದೇಶಕರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.

6. ಯಶಸ್ವಿ ಬಿಡ್ಡುದಾರರಿಗೆ ತೀವ್ರ ಕಷ್ಟದ ಪರಿಸ್ಥಿತಿಯಲ್ಲಿ ವಾಹನದ ಬಾಕಿ ಮೊತ್ತ ಪಾವತಿಸಲು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಬಾಕಿ ಮೊತ್ತ ಅದರ ಮೇಲಿನ ಬಡ್ಡಿ ಹಾಗೂ ನೆಲಬಾಡಿಗೆಯನ್ನು ವಿಧಿಸಿ, ಅವಧಿ ವಿಸ್ತರಣೆ ನೀಡಲು ಅಧಿಕಾರವುಳ್ಳವರಾಗಿರುತ್ತಾರೆ.
7. ಸದರಿ ವಾಹನದ ಮೇಲೆ ಬೇರೆ ಯಾವುದೇ ಹಣ ಬಾಕಿ ಇದ್ದಲ್ಲಿ ಸದರಿ ಬಾಕಿ ತೀರುವಳಿ ಜವಾಬ್ದಾರಿ ಬಿಡ್ಡುದಾರರದಾಗಿರುತ್ತದೆ.
8. ಟೆಂಡರ್ ಫಾರಂಗಳನ್ನು ಈ ಕಚೇರಿಯ ಸಮಯದಲ್ಲಿ ನಿಗದಿತ ಶುಲ್ಕ ಹತ್ತು ರೂಪಾಯಿ ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಕಟ್ಟಿ ದಿನಾಂಕ: 23.04.2005 ರಿಂದ 30.04.2005 ರವರೆಗೆ ಮಧ್ಯಾಹ್ನ 12.00 ಗಂಟೆಯವರೆಗೆ ಪಡೆಯಬಹುದು.
9. ಟೆಂಡರ್‌ಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ಮೊಹರು ಮಾಡಿದ ಕವರಿನಲ್ಲಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಕಚೇರಿಯಲ್ಲಿ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ದಿನಾಂಕ: 30.04.2005 ರಂದು ಮಧ್ಯಾಹ್ನ 2.00 ಗಂಟೆಗೆ ಹಾಕುವುದು.
10. ಒಬ್ಬರು ಒಂದು ಟೆಂಡರ್‌ನ್ನು ಮಾತ್ರ ಹಾಕಬಹುದು. ಒಂದಕ್ಕಿಂತ ಹೆಚ್ಚು ಟೆಂಡರ್ ಹಾಕಿದಲ್ಲಿ ಹೆಚ್ಚು ಮೊತ್ತವನ್ನು ಒಳಗೊಂಡಿರುವ ಟೆಂಡರ್‌ನ್ನು ಮಾತ್ರ ಪರಿಗಣಿಸಿ ಮಿಕ್ಕ ಟೆಂಡರ್‌ಗಳನ್ನು ತಿರಸ್ಕೃತಗೊಳಿಸಲಾಗುವುದು.
11. ಟೆಂಡರ್ ಕವರಿನ ಮೇಲೆ ಕಾರಿನ ಸಂಖ್ಯೆ ನಮೂದಿಸುವುದು ಮತ್ತು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಹೆಸರಿಗೆ ಟೆಂಡರ್ ಅರ್ಜಿಗಳನ್ನು ಸಲ್ಲಿಸಬೇಕು.
12. ಹರಾಜು ದಿನಾಂಕ: 30.04.2005 ರಂದು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಟೆಂಡರ್ ಕಂ ಹರಾಜು ನಡೆಸುವರು:
13. ಈ ಮೇಲಿನ ದಿನಾಂಕದಂದು ಅನಿವಾರ್ಯ ಕಾರಣಗಳಿಂದ ಹರಾಜು ನಿಂತಲ್ಲಿ ದಿನಾಂಕ: 7.5.2005 ರಂದು ಅಪರಾಹ್ನ 3.00 ಗಂಟೆಗೆ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
14. ಟೆಂಡರ್‌ಗಳನ್ನು ಹರಾಜಿನ ನಂತರ ಹಾಜರಿರುವ ಟೆಂಡರ್‌ದಾರರು, ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
15. ಹರಾಜು ನಡೆಯುವ ದಿನ ಅಥವಾ ಟೆಂಡರ್ ಫಾರಂ ಪಡೆಯಲು ನಿಗದಿಪಡಿಸಿರುವ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜನ್ನು ಮತ್ತು ಟೆಂಡರ್ ಪಡೆಯುವ ದಿನವನ್ನು ಮುಂದಿನ ಕಚೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.
16. ವಾಹನದ ಮಾಲೀಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.

ಜಂಟಿ ನಿರ್ದೇಶಕರು,
ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್.213

## ಜಲ ಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ
## ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿ
## ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ಧತಿ)

**ಸಂಖ್ಯೆ: ಸನೀವಿ:ಬೀದರ:ತಾಶಾ-5:ತೇಗಂಪೂರ:ಟೆಂಡರ್:2005-06/1158 ದಿನಾಂಕ: 2ನೇ ಏಪ್ರಿಲ್ 2005**

ಕರ್ನಾಟಕ ಲೋಕೋಪಯೋಗಿ ಸಂಹಿತೆ ಪಿಡಬ್ಲ್ಯೂಜಿ 65 ಮತ್ತು 66 ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಆಕ್ಟ್ 2000 ಮತ್ತು ಅದರ ಇತ್ತೀಚಿನ ತಿದ್ದುಪಡಿಗಳಂತೆ ಕರ್ನಾಟಕ ರಾಜ್ಯದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಲಿ ನೊಂದಾಯಿಸಿರುವ ಪ್ರಥಮ ದರ್ಜೆ (ಸಿವಿಲ್) ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಾಗಿ ಐಟಂ ರೇಟ್ ಟೆಂಡರ್‌ನ್ನು ಎರಡು ಲಕೋಟೆ ಪದ್ಧತಿಯಂತೆ ದ್ವಿಪ್ರತಿಯಲ್ಲಿ ಸಲ್ಲಿಸಲು ಕರೆಯಲಾಗಿದೆ. ಎರಡು ಲಕೋಟೆಗಳಲ್ಲಿ ಒಂದು "ತಾಂತ್ರಿಕ ಬಿಡ್" ಎರಡನೆಯದು "ಆರ್ಥಿಕ ಬಿಡ್" ಆಗಿರುತ್ತದೆ. ತಾಂತ್ರಿಕ ಬಿಡ್ಡನ್ನು ಪ್ರಥಮ ಹಂತದಲ್ಲಿ ತೆರೆಯಲಾಗುವುದು ಮತ್ತು ತದನಂತರ ಕೇವಲ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದ ಗುತ್ತಿಗೆದಾರರ "ಆರ್ಥಿಕ ಬಿಡ್‌ನ್ನು" ತೆರೆದು ವಿಶ್ಲೇಷಿಸಲಾಗುವುದು.

ಕಾಮಗಾರಿಯ ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಹ ಗುತ್ತಿಗೆದಾರರು ಅರ್ಜಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ, ಪ್ರತಾಪ ನಗರ ನೌಬಾದ ಬೀದರ ಕಛೇರಿಯಲ್ಲಿ ಟೆಂಡರ್ ಪುಸ್ತಕಗಳ ಬೆಲೆಯೊಂದಿಗೆ (ಹಿಂತಿರುಗಿಸಲಾರದ) ಸಲ್ಲಿಸುವುದು. ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಬೀದರ ರವರ ಕಛೇರಿಯಲ್ಲಿಯೇ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ನೀಡಲಾಗುವುದು.

ಭರ್ತಿ ಮಾಡಿದ ಮೊಹರ್ ಬಂದ ಟೆಂಡರುಗಳನ್ನು ಏಕ ಕಾಲದಲ್ಲಿ ಸದರಿ ಕಾಮಗಾರಿಗಾಗಿ ಇರಿಸಿದ ಮೊಹರ್ ಬಂದ ಟೆಂಡರ್ ಪೆಟ್ಟಿಗೆಗಳಲ್ಲಿ 1) ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಬೀದರ (ಪ್ರತಾಪ ನಗರ ನೌಬಾದ ಬೀದರ) 2) ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪೂರ ಮತ್ತು 3) ಅಧೀಕ್ಷಕ ಅಭಿಯಂತರರು ಸಣ್ಣ ನೀರಾವರಿ ವೃತ್ತ ಐವಾನ-ಇ-ಶಾಹಿ ಗುಲ್ಬರ್ಗಾ ರವರ ಕಛೇರಿಗಳಲ್ಲಿ ಸ್ವೀಕರಿಸಲಾಗುವುದು.

ಕಾಮಗಾರಿಯ ತಾಂತ್ರಿಕ ಬಿಡ್‌ಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ಇವರ ಕಛೇರಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರವರಿಂದ ಹಾಜರಿದ್ದ ಗುತ್ತಿಗೆದಾರರ ಅಥವಾ ಅವರ ಪರವಾಗಿ ಹಾಜರಿದ್ದ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರ ಹೆಸರುಗಳನ್ನು ಕಛೇರಿ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು.

1) ಕಾಮಗಾರಿಯ ಹೆಸರು : ಬೀದರ್ ಜಿಲ್ಲೆ ಔರಾದ ತಾಲೂಕಿನ ತೇಗಂಪೂರ ಕೆರೆಯ ಆಧುನೀಕರಣ
2) ಟೆಂಡರಿಗೆ ಅಳವಡಿಸಿದ ಕಾಮಗಾರಿಯ ಅಂದಾಜು ಮೊತ್ತ : ರೂ.116.50 ಲಕ್ಷ

| | | | |
|---|---|---|---|
| 3) | ಇ.ಎಂ.ಡಿ. (ಭದ್ರತಾ ಠೇವಣಿ) ಟೆಂಡರ್ ತೆರೆಯುವ ದಿನಾಂಕದಿಂದ 90 ದಿನಗಳವರೆಗೆ ಚಾಲ್ತಿಯಲ್ಲಿರಬೇಕು | : | ರೂ. 1,16,500.00 |
| 4) | ಖಾಲಿ ಟೆಂಡರ್ ಪುಸ್ತಕಗಳ ಬೆಲೆ (ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ) | : | ರೂ.10,000.00 + ತೆರಿಗೆ |
| 5) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಕಾಶ | : | 9 ತಿಂಗಳು (ಮಳೆಗಾಲ ಹೊರತುಪಡಿಸಿ) |
| 6) | ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಜಿಸಲ್ಲಿಸಲು ಕೊನೆಯ ದಿನಾಂಕ ಕಛೇರಿ ವೇಳೆಯಲ್ಲಿ ಮಧ್ಯಾಹ್ನ 1.30 ಗಂಟೆಯವರೆಗೆ | : | 16.05.2005 |
| 7) | ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡುವ ದಿನಾಂಕ ಕಛೇರಿ ವೇಳೆಯಲ್ಲಿ ಮಧ್ಯಾಹ್ನ 1.30 ಗಂಟೆಯವರೆಗೆ | : | 24.05.2005 |
| 8) | ಭರ್ತಿ ಮಾಡಿದ ಮೊಹರು ಬಂದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: (ತಾಂತ್ರಿಕ ಬಿಡ್‌ಲಕೋಟೆ, ಆರ್ಥಿಕ ಬಿಡ್ ಲಕೋಟೆ ಪ್ರತ್ಯೇಕ) | : | 30.05.2005 ಮಧ್ಯಾಹ್ನ 1.00 ಗಂಟೆಯವರೆಗೆ |
| 9) | ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ (ಸಾಧ್ಯವಾದಲ್ಲಿ) | : | 31.05.2005 ಮಧ್ಯಾಹ್ನ 12.00 ಗಂಟೆಗೆ |
| 10) | ಅರ್ಹಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ | : | ತದನಂತರ ತಿಳಿಸಲಾಗುವುದು. |

**ಷರತ್ತುಗಳು:**

1. ಟೆಂಡರ್ ಖಾಲಿ ಪುಸ್ತಕಗಳನ್ನು ಪಡೆಯಲು ಇಚ್ಚಿಸಿರುವ ಗುತ್ತಿಗೆದಾರರು ಅರ್ಜಿಯ ಜೊತೆಯಲ್ಲಿ ಖಾಲಿ ಟೆಂಡರ್ ಪುಸ್ತಕಗಳ (ಹಿಂತಿರುಗಿಸಲಾಗದ) ಬೆಲೆಯನ್ನು, ಗುತ್ತಿಗೆದಾರರು ನೋಂದಾಯಿಸಿರುವ ಪ್ರಮಾಣ ಪತ್ರದ ಪ್ರತಿಯನ್ನು, ಮತ್ತು ಇತ್ತೀಚಿನ ಸೇಲ್ಸ್‌ಟ್ಯಾಕ್ಸ್ ಮತ್ತು ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ದಸ್ತಾವೇಜುಗಳ ಪ್ರತಿಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಬೀದರ್ ರವರಿಗೆ ಸಲ್ಲಿಸುವುದು.
2. ಅಗತ್ಯ ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ರಾಷ್ಟ್ರೀಕೃತ/ಶೆಡ್ಯೂಲ್ ಬ್ಯಾಂಕುಗಳ ಡಿ.ಡಿ./ಎಫ್.ಡಿ.ಆರ್/ಬ್ಯಾಂಕ್ ಗ್ಯಾರಂಟಿ/ಟಿ.ಡಿ.ಆರ್ ರೂಪದಲ್ಲಿ ಅಥವಾ ಪ್ಲೆಡ್ಜ್ ಮಾಡಿದ ಎನ್.ಎಸ್.ಸಿ. ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ ಬೀದರ ರವರ ಹೆಸರಿನಲ್ಲಿ ತೆಗೆದು ಗುತ್ತಿಗೆ ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಸಲ್ಲಿಸುವ ಅರ್ಜಿ ಜೊತೆಯಲ್ಲಿ ಸಲ್ಲಿಸುವುದು.
3. ಟೆಂಡರಿನಲ್ಲಿ ಅನರ್ಹರಾದ ಗುತ್ತಿಗೆದಾರರ ಇ.ಎಂ.ಡಿ. (ಭದ್ರತಾ ಠೇವಣಿ)ಯನ್ನು ಟೆಂಡರುಗಳು ತೆರೆದ 90 (ತೊಂಬತ್ತು) ದಿನಗಳ ನಂತರ ಹಿಂತಿರುಗಿಸಲಾಗುವುದು.
4. ಟೆಂಡರಿನ ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸಿರುವ ಎಲ್ಲಾ ದಾಖಲೆಗಳು ನೋಟರಿ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ಮೇಲ್ ರುಜು ಮಾಡಿರಬೇಕು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಟೆಂಡರಿನ ತಾಂತ್ರಿಕ ಬಿಡ್ ತೆರೆಯುವ ದಿನಾಂಕದಂದು ಅಥವಾ ಸ್ಪೆಸಿಫೈಡ್ ದಿನಾಂಕದಂದು ಗುತ್ತಿಗೆದಾರರು ಕಛೇರಿಗೆ ಹಾಜರುಪಡಿಸಬೇಕು ಇಲ್ಲದಿದ್ದಲ್ಲಿ ಟೆಂಡರುಗಳನ್ನು ತಿರಸ್ಕೃತ ಮಾಡಲಾಗುವುದು.
5. ಷರತ್ತಿನ ಟೆಂಡರುಗಳನ್ನು ಪರಿಗಣಿಸುವುದಿಲ್ಲಾ.
6. ಗುತ್ತಿಗೆದಾರರು, ಕರ್ನಾಟಕ ರಾಜ್ಯದಲ್ಲಿ ಇದೇ ಮಾದರಿಯ (ಅಂದರೆ ಸಣ್ಣ ನೀರಾವರಿ ಕೆರೆ ನಿರ್ಮಾಣ/ಕಾಲುವೆ ಕಾಮಗಾರಿ/ಏತನೀರಾವರಿ ಯೋಜನೆ/ಬಂದಾರಾ/ಸೇತುವೆಯನ್ನೊಳಗೊಂಡ ಬಂದಾರಾ) ಕನಿಷ್ಠ ರೂ.50.00 ಲಕ್ಷ ಮೌಲ್ಯದ ಯಾವುದಾದರೂ ಒಂದು ಕಾಮಗಾರಿಯನ್ನು ಕಳೆದ ಮೂರು ವರ್ಷಗಳಲ್ಲಿನ ಒಂದು ಆರ್ಥಿಕ ವರ್ಷದಲ್ಲಿ ಸಮರ್ಪಕವಾಗಿ ಮಾಡಿರುವ ಬಗ್ಗೆ ಅನುಭವ ಪ್ರಮಾಣ ಪತ್ರ ಸಲ್ಲಿಸುವುದು. ಸದರಿ ಪ್ರಮಾಣ ಪತ್ರವನ್ನು ಕಾರ್ಯನಿರ್ವಾಹಕ ಅಭಿಯಂತರರು, ಅಥವಾ ಅವರ ಮೇಲಾಧಿಕಾರಿಗಳಿಂದ ಪಡೆದಿರುವುದು.
7. ಕಾಮಗಾರಿಯನ್ನು ನಿರ್ವಹಿಸಿರುವ ಬಗ್ಗೆ ಅನುಭವ ಪ್ರಮಾಣ ಪತ್ರ ಸಲ್ಲಿಸದ ಗುತ್ತಿಗೆದಾರರ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
8. ಕಡಿಮೆ ಟೆಂಡರ್ ಪ್ರೀಮಿಯಮ್ ಇರುವ ಟೆಂಡರ್‌ಗಳು ಕಾಮಗಾರಿಯ ಆರ್ಥಿಕ ಬಿಡ್ಡಿನ ಜೊತೆಯಲ್ಲಿ ಟೆಂಡರಿಗೆ ಅಳವಡಿಸಿದ ಕಾಮಗಾರಿಯ ಮೊತ್ತ ಮತ್ತು ಸಲ್ಲಿಸಿರುವ ಟೆಂಡರಿನ ಮೊತ್ತದ ವ್ಯತ್ಯಾಸದ ಹಣವನ್ನು ಸಂಬಂಧಪಟ್ಟ ಗುತ್ತಿಗೆದಾರರು/ ಡಿ.ಡಿ/ಎಫ್.ಡಿ.ಆರ್. ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಬೀದರ ರವರ ಹೆಸರಿನಲ್ಲಿ ಲಗತ್ತಿಸಿರಬೇಕು.
9. ಅಂಚೆಯ ಮೂಲಕ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡಲಾಗುವುದಿಲ್ಲ.
10. ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ತಿರಸ್ಕರಿಸುವ ಹಕ್ಕು ಕಾಯ್ದಿರಿಸಿದೆ.
11. ಗುತ್ತಿಗೆದಾರರು ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ತಮ್ಮ ನೋಂದಣಿ ಪುಸ್ತಕವನ್ನು ತರುವುದು.
12. ಸದರಿ ಕಾಮಗಾರಿಯ ಬಗ್ಗೆ ಏನಾದರೂ ಮಾಹಿತಿಯನ್ನು ಪಡೆಯಬೇಕಾದ್ದಲ್ಲಿ ಅದನ್ನು ಕಛೇರಿಯ ವೇಳೆಯಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಬೀದರ ರವರ ಕಚೇರಿಯಿಂದ ಕಚೇರಿ ವೇಳೆಯಲ್ಲಿ ಮಾಹಿತಿಯನ್ನು ಪಡೆಯಬಹುದು. ಕಛೇರಿ ದೂರವಾಣಿ ಸಂಖ್ಯೆ: 08482-232080
13. ಸದರಿ ಟೆಂಡರ್ ಘಟನಾವಳಿಗಳಿಗೆ ಅಳವಡಿಸಿದ ದಿನಾಂಕಗಳು ಸಾರ್ವತ್ರಿಕ ರಜೆ ಎಂದು ಘೋಷಿತವಾದಲ್ಲಿ ಆ ದಿನಾಂಕಗಳ ಮರುದಿನಾಂಕಗಳನ್ನು ಟೆಂಡರ್‌ಗಳಿಗಾಗಿ ಪರಿಗಣಿಸುವುದು.

**ಗುಂಡಪ್ಪಾ ಚಿಲ್ಲಾಳಿ**

ಪಿ.ಆರ್.214 ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

**ಅಧಿಸೂಚನೆ ಸಂಖ್ಯೆ: ಬಿ3:ಶ್ರೀಗಂಧ:ಸಿಆರ್:1/2005-06 ದಿನಾಂಕ: 18ನೇ ಏಪ್ರಿಲ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಸರ್ಕಾರಿ ಶ್ರೀಗಂಧ ಉಗ್ರಾಣ ಶಿವಮೊಗ್ಗದಲ್ಲಿ ಕೆಳಕಂಡ ಶ್ರೀಗಂಧ ಬಿಳಿಚಕ್ಕೆ ಮತ್ತು ಶ್ರೀಗಂಧದ ಪುಡಿಯನ್ನು ದಿನಾಂಕ: 18.05.2005 ರಂದು ಬೆಳಿಗ್ಗೆ 11.00 ಗಂಟೆಗೆ ಸಾರ್ವಜನಿಕ ಬಹಿರಂಗ ಹರಾಜನ್ನು ಮಾಡಲಾಗುವುದು.

| ಕ್ರ. ಸಂ. | ಶ್ರೀಗಂಧದ ವರ್ಗೀಕರಣ | ಪ್ರಮಾಣ (ಟನ್ನುಗಳಲ್ಲಿ) |
|---|---|---|
| 1. | ಹಾರ್ಟವುಡ್ | 8.000 |
| 2. | ಅ) ಬಸಲ ಬುಕ್ಕಿ | 1.500 |
| | ಆ) ಮಿಲ್ಲಚಿಲ್ಪಾ | 1.500 |
| 3. | ಬಿಳಿ ಚಕ್ಕೆ | 5.000 |

ವಿವರಗಳನ್ನು ಸರ್ಕಾರಿ ಶ್ರೀಗಂಧದ ಕೋಠಿ ಅಧಿಕಾರಿಗಳಿಂದ ಪಡೆಯಬಹುದು. (ದೂರವಾಣಿ ಸಂಖ್ಯೆ: ಪಿ.ಪಿ.08182-240385)

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್.221

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್" ಬೆಂಗಳೂರು
### ತಿದ್ದುಪಡಿ ಸಂಖ್ಯೆ: ಇ.ಪ.(1)551/2005-06/ಪಿಎಸ್‌ಸಿ ದಿನಾಂಕ: 11ನೇ ಏಪ್ರಿಲ್ 2005

2004ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದ ಅಂಕಗಳ ಮರು ಎಣಿಕೆಗಾಗಿ ಕೆಲವೊಂದು ಅಭ್ಯರ್ಥಿಗಳಿಂದ ಬಂದಿದ್ದ ಕೋರಿಕೆಯಂತೆ ಮರು ಎಣಿಕೆಯ ನಂತರ ಗಳಿಸಿದ ಅಂಕಗಳಲ್ಲಿ ಹಾಗೂ ಅರ್ಜಿಯಲ್ಲಿ ವಿನಾಯಿತಿ ಕೋರದೆಯಿದ್ದು ನಂತರ ವಿನಾಯಿತಿ ಕೋರಿದ್ದನ್ನು ಪರಿಗಣಿಸಿದ ನಂತರ ಕಂಡುಬಂದ ಬದಲಾವಣೆಗನುಸಾರವಾಗಿ, ದಿನಾಂಕ: 15.03.2005ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿರುವ ಸದರಿ ಅಧಿವೇಶನದ ಫಲಿತಾಂಶವನ್ನು ಅದರಲ್ಲಿ ಪರಿಶಿಷ್ಟ-'ಎ' ಮತ್ತು 'ಬಿ' ರಡಿ ಕೆಳಕಂಡವುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ಪರಿಶಿಷ್ಟ-'ಎ'**

| ನೋಂ.ಸಂ. | ವಿಷಯ | ಕೇಂದ್ರ | ತೇರ್ಗಡೆ ದರ್ಜೆ |
|---|---|---|---|
| 31582 | ರೆವಿನ್ಯೂ ಹೈಯರ್ ಭಾಗ-2 | ಮಂಗಳೂರು | ಪ್ರಥಮ |
| 32201 | ಜನರಲ್ ಲಾ ಭಾಗ-1 | ಮಡಿಕೇರಿ | ಸಾಮಾನ್ಯ |

**ಪರಿಶಿಷ್ಟ-'ಬಿ'**

| | | |
|---|---|---|
| 11132 | ಎಸ್.ಎ.ಎಸ್. ಭಾಗ-3 | ಬೆಳಗಾವಿ |
| 20242 | ಜನರಲ್ ಲಾ ಭಾಗ-1 | ದಾವಣಗೆರೆ |

ಕಾರ್ಯದರ್ಶಿ,
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್.216

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4
## ಟೆಂಡರ್ ಪ್ರಕಟಣೆ
### ಸಂಖ್ಯೆ: ತೋಇ:ತೋಬೆ ಮತ್ತು ಸಸಂ:ಸತೋಅ-2:117:04-05 ದಿನಾಂಕ: 31ನೇ ಮಾರ್ಚ್ 2005

**ವಿಷಯ :** 2005-06ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಗೆ ಗೋಡಂಬಿ ಕಸಿ ಗಿಡಗಳನ್ನು ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.
2. ಸರ್ಕಾರದ ಆದೇಶ ಪತ್ರ ಸಂ:ಎಪಿ.ಎನ್.ಡಿ.ಸಿ.ಡಿ:1530, ದಿನಾಂಕ: 7.11.00

ತೋಟಗಾರಿಕೆ ಇಲಾಖೆಯು ಅನುಷ್ಠಾನಗೊಳಿಸುವ ಕೇಂದ್ರ ಪುರಸ್ಕೃತ ಗೇರು ಅಭಿವೃದ್ಧಿ ಯೋಜನೆಯಲ್ಲಿ 2005-06ನೇ ಸಾಲಿಗೆ ರಾಜ್ಯದ ವಿವಿಧ ಜಿಲ್ಲೆಗಳಿಗೆ ಉತ್ಕೃಷ್ಟ ಗೋಡಂಬಿ ಕಸಿ ಗಿಡಗಳನ್ನು ಸರಬರಾಜು ಮಾಡಲು ಕೊಕೋ ಮತ್ತು ಗೋಡಂಬಿ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ಅವರಿಂದ ಅನುಮೋದನೆಗೊಂಡ ನರ್ಸರಿಗಳು ತಮ್ಮ ಅತೀ ಕಡಿಮೆ ದರಗಳನ್ನು ನಮೂದಿಸಿ ಮೊಹರಾದ ಟೆಂಡರ್ ಲಕೋಟೆಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ **ಗೋಡಂಬಿ ಕಸಿ ಗಿಡಗಳ ಪೂರೈಕೆಗೆ ಟೆಂಡರ್ 2005-06** ಎಂದು ನಮೂದಿಸತಕ್ಕದ್ದು. ಹೆಚ್ಚಿನ ಮಾಹಿತಿಗಾಗಿ ತೋಟಗಾರಿಕೆ ಜಂಟಿ ನಿರ್ದೇಶಕರು, (ತೋಟದ ಬೆಳೆಗಳು), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ). ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.100-00 (ರೂ. ಒಂದು ನೂರು ಮಾತ್ರ) ಗಳನ್ನು ಪಾವತಿಸಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ರೀತಿಯಲ್ಲಿ ಟೆಂಡರ್ ಸಲ್ಲಿಸಿದ್ದರೆ, ತಿರಸ್ಕರಿಸಲಾಗುವುದು.

ನೀವು ಸರಬರಾಜು ಮಾಡುವ ಗೇರು ಕಸಿ ಗಿಡಗಳ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ.25,000-00 (ರೂ. ಇಪ್ಪತ್ತೈದು ಸಾವಿರ ಮಾತ್ರ) ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿದ ಬ್ಯಾಂಕ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ದಿನಾಂಕ: 16.05.05 ರಂದು ಮಧ್ಯಾಹ್ನ 4.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು. ಟೆಂಡರ್ ಫಾರಂನ್ನು ದಿನಾಂಕ: 11.04.05 ರಿಂದ 13.05.05 ರವರೆಗೆ ಕಛೇರಿ ವೇಳೆಯಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಹಾಗೂ ದಿನಾಂಕ: 16.05.05 ರಂದು ಮಧ್ಯಾಹ್ನ 12.00 ಗಂಟೆವರೆಗೆ ಪಡೆಯಬಹುದು.

ಟೆಂಡರ್‌ಗಳನ್ನು ದಿನಾಂಕ: 17.05.05 ರಂದು ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಹಣವನ್ನು ಹಿಂತಿರುಗಿಸಲಾಗುವುದು. ಟೆಂಡರ್ ಒಪ್ಪಿಗೆಯಾದವರ

ಭದ್ರತಾ ಠೇವಣಿ ಹಣವನ್ನು ಅವರ ಸರಬರಾಜು ಪ್ರಕ್ರಿಯೆ ಪೂರ್ಣವಾದ ನಂತರ ನಿಗದಿಪಡಿಸಿದ ಪ್ರಮಾಣ ಹಾಗೂ ಗುಣಮಟ್ಟದ ಗೇರು ಕಸಿ ಗಿಡಗಳನ್ನು ಪಡೆದಿರುವ ದೃಢೀಕರಣವನ್ನು ಸಂಬಂಧಪಟ್ಟ ಅನುಷ್ಠಾನಾಧಿಕಾರಿಗಳಿಂದ ಖಾತರಿಪಡಿಸಿಕೊಂಡ ಮೇಲೆ ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರ ಹೆಸರುಗಳನ್ನು ಎಲ್ಲಾ ಜಿಲ್ಲಾ/ ತಾಲ್ಲೂಕು ಅನುಷ್ಠಾನಾಧಿಕಾರಿಗಳಿಗೆ ಕಳುಹಿಸಿ ಕೊಡುವುದರಿಂದ ಅನುಮೋದಿತ ಟೆಂಡರ್‌ದಾರರು ಆಯಾ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು, (ಜಿಪಂ)/ತಾಲ್ಲೂಕು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಿಪಂ)/ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ), ರವರಿಂದ ಬೇಡಿಕೆಗಳನ್ನು ಪಡೆದು ಸಾಗಾಣಿಕಾ ವೆಚ್ಚವನ್ನು ತಾವೆ ಭರಿಸಿಕೊಂಡು ಆಯಾ ಅನುಷ್ಠಾನಾಧಿಕಾರಿಗಳು ಸೂಚಿಸುವ ಸ್ಥಳಗಳಿಗೆ ಸರಬರಾಜು ಮಾಡಬೇಕು. ಕನಿಷ್ಠ ಟೆಂಡರ್ ದರವು ಸಾಗಾಣಿಕೆ ವೆಚ್ಚವನ್ನು ಒಳಗೊಂಡಿದ್ದು ಆಯಾ ಕ್ಷೇತ್ರಾಧಿಕಾರಿಗಳ ಸ್ಥಳಗಳಿಗೆ ಸರಬರಾಜು ಮಾಡುವುದನ್ನು ಒಳಗೊಂಡಿರತಕ್ಕದ್ದು.

**ಷರತ್ತುಗಳು:**

1. 2005-06ನೇ ಸಾಲಿನ ಮ್ಯಾಕ್ರೋಮೋಡ್ ಯೋಜನೆ, ನ್ಯಾಷನಲ್ ಹಾರ್ಟಿಕಲ್ಚರ್ ಮಿಷನ್ ಹಾಗೂ ಸಪ್ಲಿಮೆಂಟರಿ ಕ್ರಿಯಾ ಯೋಜನೆಗಳ ನಿರೀಕ್ಷಿತ ಅನುದಾನದ ಅಂದಾಜು ರೂ.621.00 ಲಕ್ಷಗಳಿರುತ್ತದೆ. ಈ ಅನುದಾನದಲ್ಲಿ ವ್ಯತ್ಯಾಸವಾಗುವ ಸಂಭವವಿರುತ್ತದೆ.
2. 6 ಇಂಚು ಅಗಲ 9 ಇಂಚು ಉದ್ದ ಪಾಲಿಥೀನ್ ಬ್ಯಾಗ್‌ನಲ್ಲಿ ಕನಿಷ್ಠ 7-9 ಸಂಖ್ಯೆ (ರೋಗ ಕೀಟ ಭಾದೆ ರಹಿತ) ಸಮೃದ್ಧ ಎಲೆಗಳುಳ್ಳ ಉತ್ತಮ ಕಸಿ ಗಿಡಗಳನ್ನು ಸರಬರಾಜು ಮಾಡಬೇಕು.
3. ಗಿಡಗಳು ಪೆನ್ಸಿಲ್‌ನಷ್ಟು ದಪ್ಪ ಗಾತ್ರದ ಕಾಂಡ ಇದ್ದು, ಇವು 7 ಇಂಚಿನಿಂದ 9 ಇಂಚುವರೆಗೆ ಉದ್ದ ಇರಬೇಕು ಮತ್ತು ಗಿಡಗಳ ವಯಸ್ಸು ಕಸಿ ಕಟ್ಟಿದ ಮೇಲೆ ಕನಿಷ್ಠ 5 ತಿಂಗಳು ಆಗಿರಬೇಕು.
4. ಟೆಂಡರ್‌ದಾರರು ಭಾರತ ಸರ್ಕಾರದ ಗೇರು ಮತ್ತು ಕೊಕೋ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ಇವರಿಂದ ಅನುಮೋದನೆ ಗೊಂಡಿರಬೇಕು (ಸಂಬಂಧಿಸಿದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು).
5. ಟೆಂಡರ್ ಸಲ್ಲಿಸುವವರು ನರ್ಸರಿ ವಿಳಾಸವನ್ನು ಟೆಂಡರ್ ಫಾರಂನಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು ಹಾಗೂ ಟೆಂಡರ್‌ದಾರರು ಸ್ವತಃ ಉತ್ಪಾದಕರಾಗಿರಬೇಕು, ಹಾಗೂ ತಾಯಿ ಗಿಡಗಳನ್ನು ಹೊಂದಿರಬೇಕು.
6. ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿದ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸಬೇಕು. ಚೆಕ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ಮೂಲಕ ಸಲ್ಲಿಸಿದ್ದಲ್ಲಿ ಸ್ವೀಕರಿಸಲಾಗುವುದಿಲ್ಲ.
7. ಕನಿಷ್ಠ 1.00 ಲಕ್ಷ ಸಂಖ್ಯೆ ಉತ್ತಮ ಗೇರು ಕಸಿ ಗಿಡಗಳನ್ನು ಒದಗಿಸುವ ಸಾಮರ್ಥ್ಯವುಳ್ಳವರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. ಇಲಾಖೆಗೆ ಬೇಕಾದ ತಳಿಗಳು ಉಲ್ಲಾಳ್ 1,2,3,4 ಚಿಂತಾಮಣಿ 1, ವೆಂಗುರ್ಲ-1,4,7 ಮತ್ತು ಎನ್.ಆರ್.ಸಿ.ಸಿ. ಪುತ್ತೂರು ಇವರು ಶಿಫಾರಸ್ಸು ಮಾಡಿದ ತಳಿಗಳು.
8. ಯಶಸ್ವಿಯಾದ ಟೆಂಡರ್‌ದಾರರ ವಿಳಾಗಳನ್ನು ರಾಜ್ಯದ ವಿವಿಧ ಜಿಲ್ಲೆಗಳ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಹಾಗೂ ಇನ್ನಿತರ ತಾಲ್ಲೂಕು ಅಧಿಕಾರಿಗಳಿಗೆ ಕಳುಹಿಸಿ ಕೊಡಲಾಗುವುದರಿಂದ ಬೇಡಿಕೆಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದು, ಸೂಚಿಸುವ ಸ್ಥಳಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಅನುಷ್ಠಾನಾಧಿಕಾರಿಗಳು ತಿಳಿಸಿದ ದಿನಾಂಕದೊಳಗಾಗಿ ಸರಬರಾಜು ಮಾಡಲು ಸಿದ್ದರಿರಬೇಕು.
9. ಯಶಸ್ವಿಯಾದ ಯಾವುದೇ ಟೆಂಡರ್‌ದಾರರಿಗೆ ನಿರ್ದೇಶನಾಲಯದಿಂದ ನೇರವಾಗಿ ಯಾವುದೇ ಕಸಿ ಗಿಡಗಳನ್ನು ಸರಬರಾಜು ಮಾಡಲು ಬೇಡಿಕೆ ನೀಡಲಾಗುವುದಿಲ್ಲ. ಬೇಡಿಕೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು/ತಾಲ್ಲೂಕು ಮಟ್ಟದ ಅಧಿಕಾರಿಗಳು ಮಾತ್ರ ನೀಡುವುದು. ಅನುಮೋದಿತ ಸರಬರಾಜುದಾರರಿಗೆ ಬೇಡಿಕೆಗಳನ್ನು ನೀಡುವುದು ಅಥವಾ ಬಿಡುವುದು ಆಯಾ ಜಿಲ್ಲೆಗಳ ಅನುಷ್ಠಾನಾಧಿಕಾರಿಗಳಿಗೆ ಸಂಬಂಧಿಸಿರುತ್ತದೆ. ಈ ಬಗ್ಗೆ ಯಾವುದೇ ದೂರುಗಳು ಬಂದಲ್ಲಿ ತೋಟಗಾರಿಕೆ ನಿರ್ದೇಶನಾಲಯವು ಸ್ವೀಕರಿಸುವುದಿಲ್ಲ.
10. ಟೆಂಡರ್ ಫಾರಂ ಬೆಲೆ ರೂ.100-00 (ರೂ. ಒಂದು ನೂರು ಮಾತ್ರ) ಅನ್ನು ನೀಡಿ ನಿರ್ದೇಶನಾಲಯದಿಂದ ಪಡೆಯತಕ್ಕದ್ದು.
11. ಗೇರು ಕಸಿ ಗಿಡಗಳ ಗುಣಮಟ್ಟವನ್ನು ಪರೀಕ್ಷಿಸಿ ತೀರ್ಮಾನಿಸುವ ಸಂಪೂರ್ಣ ಜವಾಬ್ದಾರಿಯು, ತೋಟಗಾರಿಕೆ ಇಲಾಖೆಯು ರಚಿಸಿದ ಸಮಿತಿಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಹಾಗೂ ಈ ಗಿಡಗಳು ಗುಣಮಟ್ಟದಲ್ಲಿ ಕಳಪೆಯಾಗಿದ್ದಲ್ಲಿ ಅಂತಹದನ್ನು, ತಿರಸ್ಕರಿಸುವ ಪೂರ್ಣ ಹಕ್ಕು ಇಲಾಖೆಗೆ ಇರುತ್ತದೆ.
12. ಅನುಮೋದಿತ ಟೆಂಡರ್‌ದಾರರು ಸರಬರಾಜು ಮಾಡುವ ಗೇರು ಕಸಿ ಗಿಡಗಳು ನಿಗದಿತ ಗುಣಮಟ್ಟದಂತಿಲ್ಲದಿದ್ದಲ್ಲಿ, ಅನುಮೋದಿತ ಟೆಂಡರ್‌ದಾರರು ಅವರ ವೆಚ್ಚದಲ್ಲಿಯೇ ನಿಗದಿತ ಗುಣಮಟ್ಟದ ಗೇರು ಕಸಿ ಗಿಡಗಳನ್ನು ಬದಲಾಯಿಸಬೇಕು.
13. ಟೆಂಡರ್ ಸಲ್ಲಿಸುವವರು ವಿಳಾಸವನ್ನು ಹಾಗೂ ಫೋನ್ ನಂಬರ್‌ನ್ನು ಟೆಂಡರ್‌ನಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.
14. ಟೆಂಡರ್‌ದಾರರು ನಮೂದಿಸುವ ದರವು ಸಾಗಾಣಿಕೆ ವೆಚ್ಚವನ್ನು ಒಳಗೊಂಡಿರತಕ್ಕದ್ದು.
15. ಟೆಂಡರ್‌ದಾರರು ನಮೂದಿಸುವ ದರವು 2005-06ನೇ ಸಾಲಿನ ಆರ್ಥಿಕ ವರ್ಷಕ್ಕೆ ಮಾರ್ಚ್ 31,2006 ರ ವರೆಗೆ ಅನ್ವಯ ಆಗಿರತಕ್ಕದ್ದು.
16. ಟೆಂಡರ್‌ದಾರರು ಗಿಡಗಳನ್ನು ಸಾಗಾಣಿಕೆ ಮಾಡುವ ಸಮಯದಲ್ಲಿ ಯಾವುದೇ ಪ್ರಕೃತಿ ವಿಕೋಪದಿಂದ/ ಇತರೆ ಕಾರಣಗಳಿಂದ ಉಂಟಾಗುವ ಹಾನಿಗಳಿಗೆ ಅವರೇ ಜವಾಬ್ದಾರರು.
17. ಅನುಮೋದಿತ ಟೆಂಡರ್‌ದಾರರು ಮೇಲಿನ ಯಾವುದೇ ಷರತ್ತುಗಳನ್ನು ಪಾಲಿಸದಿದ್ದಲ್ಲಿ ಅವರ ಇ.ಎಂ.ಡಿ. ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಸಂಸ್ಥೆಯನ್ನು ಕಪ್ಪು ಪಟ್ಟಿಗೆ ಸೇರಿಸಲಾಗಿದೆ.
18. ಯಾವುದೇ ಕಾರಣ ನೀಡದೇ ಟೆಂಡರ್ ರದ್ದುಗೊಳಿಸುವ, ತಿರಸ್ಕರಿಸುವ ಹಾಗೂ ಪುರಸ್ಕರಿಸುವ ನಿರ್ಧಾರ ಹಾಗೂ ಅಂತಿಮ ತೀರ್ಪು ತೋಟಗಾರಿಕೆ ನಿರ್ದೇಶಕರವರದಾಗಿರುತ್ತದೆ.
19. ಮೇಲೆ ಹೇಳಿದ ನಿಬಂಧನೆಗಳಿಗೆ ಒಪ್ಪಿಗೆಯನ್ನು ಅನುಮೋದಿತ ಸರಬರಾಜುದಾರರು: ಕರಾರು ಒಪ್ಪಿಗೆ ಪತ್ರವನ್ನು ರೂ. 20-00 ಬೆಲೆಯ ಛಾಪಾ ಕಾಗದದ ಮೇಲೆ ಬರೆದು ಸಹಿ ಮಾಡಿಕೊಡಬೇಕು.
20. ಯಾವುದೇ ಕಾನೂನು ಪರಿಹಾರಗಳಿಗೆ ಬೆಂಗಳೂರು ವ್ಯಾಪ್ತಿಯ ಕೋರ್ಟುಗಳಿಗೆ ಸೀಮಿತವಾಗಿರುತ್ತದೆ.

ಪಿ.ಆರ್.218

ತೋಟಗಾರಿಕೆ ನಿರ್ದೇಶಕರು,
ಲಾಲ್‌ಬಾಗ್, ಬೆಂಗಳೂರು.

## ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ,
## ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-560 004.
## ಟೆಂಡರ್ ಮತ್ತು ಬಹಿರಂಗ ಹರಾಜು
## ಪ್ರಕಟಣೆ ಸಂಖ್ಯೆ: ಎಸ್‌ಟಿಎನ್:ವಾಹ:ಟೆಂಡರ್:47:2005-06

ಈ ಕಛೇರಿಯ ಹಳೆಯ ಪೆಟ್ರೋಲ್ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ ಸಿಎಜಿ-1693ನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಾಹನ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 1. | ಸಿಎಜಿ-1693 | ಅಂಬಾಸಿಡರ್ ಕಾರ್ (ಪೆಟ್ರೋಲ್) | 1984 |

ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು.

1. ಆಸಕ್ತಿಯುಳ್ಳ ವ್ಯಕ್ತಿಗಳು ಮೇಲೆ ತಿಳಿಸಿದ ವಾಹನ ಅಂಬಾಸಿಡರ್ ಸಂಬಂಧವಾಗಿ ಮೊಹರಾದ ಲಕೋಟೆಯಲ್ಲಿ ತಮ್ಮ ಟೆಂಡರ್‌ನ್ನು ಮಾತ್ರ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ದಿನಾಂಕ: 21.05.2005 ರಂದು ಸಂಜೆ 4.30 ಘಂಟೆ ಅಥವಾ ಅದಕ್ಕೂ ಮುಂಚೆ ತಲುಪುವಂತೆ ಸಲ್ಲಿಸಬೇಕು.
2. ಹರಾಜು ಮಾರಾಟವು 23.05.2005 ರಂದು ಮಧ್ಯಾಹ್ನ 12.30 ಘಂಟೆಗೆ ಮೇಲೆ ತಿಳಿಸಿರುವ ಕಛೇರಿಯ ಆವರಣದಲ್ಲಿ ಪ್ರಾರಂಭ ವಾಗುವುದು. ಆಸಕ್ತಿಯುಳ್ಳ ಸವಾಲುಗಾರರು ಸಾರ್ವತ್ರಿಕ ರಜೆ ದಿನಗಳನ್ನು ಹೊರತುಪಡಿಸಿ ಬೆಳಿಗ್ಗೆ 11.30 ಘಂಟೆಯಿಂದ ಸಾಯಂಕಾಲ 5.00 ಘಂಟೆಯವರೆಗೆ ವಾಹನವನ್ನು ಈ ಕಛೇರಿಯ ಆವರಣದಲ್ಲಿ ಪರೀಕ್ಷಿಸಬಹುದು. ಮೇಲೆ ತಿಳಿಸಿದ ವಾಹನದ ಬಗ್ಗೆ ಯಾವುದೇ ಖಾತರಿ ನೀಡಲಾಗುವುದಿಲ್ಲ. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ವಿಲೇವಾರಿ ಮಾಡಲಾಗುವುದು ಮತ್ತು ಹಾಗೆಯೇ ತೆಗೆದುಕೊಂಡು ಹೋಗಬೇಕು. ಈ ಸಂಬಂಧವಾಗಿ ಯಾವುದೇ ಪತ್ರವ್ಯವಹಾರವನ್ನು ಪುರಸ್ಕರಿಸುವುದಿಲ್ಲ.
3. ಟೆಂಡರ್‌ನ್ನು ಮೊಹರಾದ ಲಕೋಟೆಯ ಮೇಲೆ "ಹಳೆಯ ಸಿಎಜಿ-1693 ಅಂಬಾಸಿಡರ್ ಪೆಟ್ರೋಲ್ ಕಾರ್ ವಿಲೇವಾರಿಗೆ ಟೆಂಡರ್" ಎಂದು ಮೇಲ್ಬರಹ ಬರೆದು ಸಲ್ಲಿಸಬೇಕು.
4. ಟೆಂಡರ್‌ನ ಮುಂಗಡವಾಗಿ ರೂ. 3,000.00 ವನ್ನು (ಮೂರು ಸಾವಿರ ರೂಪಾಯಿಗಳು ಮಾತ್ರ) ಠೇವಣಿಯಾಗಿ (EMD) ಪ್ರತ್ಯೇಕವಾಗಿ ಡೈರೆಕ್ಟರ್ ಆಫ್ ಕೋ-ಆಪರೇಟಿವ್ ಆಡಿಟ್ (Director of Co-operative Audit), ರವರ ಹೆಸರಿನಲ್ಲಿ ಪಡೆದ ಡಿ.ಡಿ. ಮುಖಾಂತರ ಸಲ್ಲಿಸಬೇಕು. (ಟೆಂಡರ್ ಲಕೋಟೆಯಲ್ಲಿ ಡಿ.ಡಿ.ಯನ್ನು ಇರಿಸಕೂಡದು) ಮತ್ತು ಡಿ.ಡಿ. ನೀಡಿದ್ದಕ್ಕೆ ಸ್ವೀಕೃತಿಯನ್ನು ಪಡೆಯತಕ್ಕದ್ದು. ಈ ಮುಂಗಡ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
5. ನಿರ್ದೇಶಕರಿಂದ ನೇಮಿಸಲ್ಪಡುವ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು, ಬಿಡ್‌ದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
6. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯನ್ನು ದಾಖಲೆಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಹರಾಜುದಾರರ/ಬಿಡ್‌ದಾರರ ಸಮಕ್ಷಮ ತೆರೆದು ಬಹಿರಂಗ ಪಡಿಸಲಾಗುವುದು. ಈ ಎರಡರಲ್ಲಿ ಅತಿ ಹೆಚ್ಚಿನ ದರವನ್ನು ಯಾರು ನಮೂದಿಸುವರೋ ಅವರನ್ನು ಯಶಸ್ವಿ ಟೆಂಡರ್‌ದಾರ/ ಬಿಡ್‌ದಾರ ಎಂದು ಪರಿಗಣಿಸಲಾಗುವುದು.
7. ಠೇವಣಿ ಹಣವನ್ನು (ಡಿ.ಡಿ) ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರೆಂದು ಪರಿಗಣಿಸಿ, ಉಳಿದವರಿಗೆ ಠೇವಣಿ ಹಣವನ್ನು (ಡಿ.ಡಿ.) ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
8. ಮುಂಗಡ ಹಣ ಠೇವಣಿ (ಡಿ.ಡಿ) ಹೊಂದಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
9. ಟೆಂಡರ್ ಯಾವುದೇ ಷರತ್ತು ಹೊಂದಿರತಕ್ಕದ್ದಲ್ಲ ಮತ್ತು ಷರತ್ತು ಹೊಂದಿದ್ದರೆ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10. ಅತಿ ಹೆಚ್ಚು ಬಹಿರಂಗ/ ಟೆಂಡರ್‌ದಾರರು ಸ್ಥಳದಲ್ಲಿಯೇ ಪೂರ್ತಿ ಹಣವನ್ನು ನಗದಾಗಿ ಪಾವತಿಸತಕ್ಕದ್ದು.
11. ಮೊದಲನೆ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಹಣ ಪಾವತಿಸಿದ ನಂತರವೇ ಎರಡನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರ ಹಣವನ್ನು ವಾಪಾಸು ಮಾಡಲಾಗುವುದು. ಒಂದು ವೇಳೆ ಮೊದಲನೇ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಪೂರ್ತಿ ಹಣ ಪಾವತಿಸದೇ ಇದ್ದಲ್ಲಿ ಅದೇ ದಿನ ಎರಡನೇ ಬಿಡ್ಡುದಾರರು ಆರ್.ಟಿ.ಓ. ಅವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು ಕಂ ಟೆಂಡರ್ ಇದ್ದಲ್ಲಿ ನೀಡಲಾಗುವುದು.
12. ಹರಾಜು ಕಂ ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ಕಂ ಟೆಂಡರ್ ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರುತ್ತದೆ.
13. ಹರಾಜು ಕಂ ಟೆಂಡರ್ ಪ್ರಾರಂಭವಾಗುವ ಸಮಯಕ್ಕೆ ಸರಿಯಾಗಿ ಎಲ್ಲಾ ಬಿಡ್ಡುದಾರರು ಭಾಗವಹಿಸತಕ್ಕದ್ದು. ಕಂಡಿಕೆ (2) ರಲ್ಲಿ ತಿಳಿಸಿರುವಂತೆ ಹರಾಜು ಪ್ರಕ್ರಿಯೆ ಮುಗಿದ ನಂತರ ಬಂದ ಸವಾಲುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
14. ಹರಾಜು ಕಂ ಟೆಂಡರ್‌ನಲ್ಲಿ ಭಾಗವಹಿಸುವವರು ಈ ಎಲ್ಲಾ ನಿಯಮದ ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ಧರಿದ್ದೇವೆಂದು ಈ ಕಛೇರಿಯ ಹರಾಜು ಕಂ ಟೆಂಡರ್ ಪುಸ್ತಕದಲ್ಲಿ ಸಹಿ ಮಾಡತಕ್ಕದ್ದು.
15. ಯಶಸ್ವಿ ಟೆಂಡರ್‌ದಾರ/ ಸವಾಲುದಾರರು ಸವಾಲಿನ ಬೆಲೆಯನ್ನು ಅದೇ ದಿನ ನಗದು ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿಯಾಗಿದ್ದ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.
16. ನಿರ್ದೇಶಕರು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ರವರು ಮಾರಾಟವನ್ನು ಖಚಿತಪಡಿಸಿದ ನಂತರ ಮಾರಾಟವು ಪೂರ್ಣಗೊಳ್ಳುತ್ತದೆ.
17. ಕರ್ನಾಟಕ ಮಾರಾಟ ತೆರಿಗೆ/ ಕೇಂದ್ರ ಮಾರಾಟ ತೆರಿಗೆ (ಸಂದರ್ಭಾನುಸಾರ) ಪ್ರಚಲಿತ ದರದಂತೆ ಅನ್ವಯವಾಗುವಂತೆ, ಅದೇ ದಿನ ಪಾವತಿಸಬೇಕು. ಟೆಂಡರ್ ಕಂ ಹರಾಜು ಹಣ ಮತ್ತು ಇದಕ್ಕೆ ಅನ್ವಯವಾಗುವ ತೆರಿಗೆಗಳು ಪ್ರತ್ಯೇಕವಾಗಿರುತ್ತದೆ.
18. ಸಂದಾಯ/ ವಶಾವಣೆ/ ಎಲ್ಲಾತೆರಿಗೆ/ ಕೇಂದ್ರ ಮಾರಾಟ ತೆರಿಗೆಗಳು ಮತ್ತು ಸುಂಕಗಳು ಪ್ರತ್ಯೇಕವಾಗಿರತಕ್ಕದ್ದು. ವಾಹನಗಳ ಹಣ ಸಂದಾಯದ ವಶಾವಣೆ ಪಡೆಯುವ ಸಂದರ್ಭದಲ್ಲಿ ಅನ್ವಯವಾಗುವ ತೆರಿಗೆಗಳ ಜೊತೆಗೆ ಟೆಂಡರ್ ಕಂ ಹರಾಜು ಹಣವನ್ನು ನಿರ್ದೇಶಕರು, ಸಹಕಾರ

ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ಸಂದಾಯ ಮಾಡತಕ್ಕದ್ದು, ತೆರಿಗೆಗಳ ಜೊತೆಗೆ ಟೆಂಡರ್ ಹಾಗೂ ಮಾರಾಟದಿಂದ ಬಂದ ಹಣವನ್ನು ಸಂದಾಯ ಮಾಡಿ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಬೆಂಗಳೂರು, ಇವರಿಂದ ಪಡೆದ ವಶಾವಣೆ ಆದೇಶವನ್ನು ಪಡೆದ ನಂತರವೇ ವಾಹನವನ್ನು ತೆಗೆದುಕೊಂಡು ಹೋಗಲು ಅನುಮತಿಸಲಾಗುವುದು.

19. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ಮಾರಾಟ ಮಾಡುವುದರಿಂದ ಕೊಳ್ಳುವವರು ತಮ್ಮೊಂದಿಗೆ ವರ್ಗಾವಣೆ ಆದೇಶದ ಪ್ರತಿಗಳು, ಮಾರಾಟ ತೆರಿಗೆ ಫಾರಂ ಇತರ ಯಾವುದೇ ಚಲನ್‌ಗಳನ್ನು ವ್ಯವಸ್ಥೆ ಮಾಡಿಕೊಳ್ಳುವ ಜವಾಬ್ದಾರಿಯನ್ನು ಕೊಳ್ಳುವವರೆ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
20. ಟೆಂಡರ್ ಕಂ ಹರಾಜು ಪ್ರಕ್ರಿಯೆ ಮುಗಿದ ನಂತರ (ಕಂಡಿಕೆ 14 ರಲ್ಲಿ ತಿಳಿಸಿರುವಂತೆ) ಆರ್.ಸಿ. ಪುಸ್ತಕ ಮತ್ತು ತೆರಿಗೆ ವಿನಾಯಿತಿ ಪತ್ರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು, ರವರಿಗೆ ವಾಹನ ವರ್ಗಾವಣೆಗೆ ಕಳುಹಿಸಲಾಗುವುದು.
21. ಈ ಹರಾಜು ಕಂ ಟೆಂಡರ್ ಈ ಕಛೇರಿಯ ಪ್ರಾಧಿಕಾರಕ್ಕೆ ಒಳಪಟ್ಟಿರುತ್ತದೆ ಮತ್ತು ಇದರ ಕುರಿತು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿರುವುದಿಲ್ಲ.
22. ಹರಾಜಿನಲ್ಲಿ ಬಿಡ್ ಮಾಡಿದ ವಾಹನವನ್ನು ನಿರ್ದೇಶಕರಿಂದ ಅನುಮೋದನೆ ಪಡೆದ ನಂತರ ತಮಗೆ ತಿಳಿಸಿದ ದಿನಾಂಕದೊಳಗೆ ಈ ಕಛೇರಿಯ ಆವರಣದಿಂದ ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ಹೀಗೆ ವಾಹನವನ್ನು ತೆಗೆದುಕೊಂಡು ಹೋಗದೆ ಇದ್ದಲ್ಲಿ ವಾಹನದ ಜವಾಬ್ದಾರಿಯು ಕೊಂಡುಕೊಳ್ಳುವವರದ್ದಾಗಿರುತ್ತದೆ.
23. ಹರಾಜು ಪ್ರಕ್ರಿಯೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

**ಟಿ. ಎ. ಪಾರ್ಥಸಾರಥಿ**

ಪಿ.ಆರ್.225 ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು.

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್" ಬೆಂಗಳೂರು
### ತಿದ್ದುಪಡಿ ಸಂಖ್ಯೆ: ಇ.ಪ.(2)101/2005-06/ಪಿಎಸ್‌ಸಿ ದಿನಾಂಕ: 21ನೇ ಏಪ್ರಿಲ್ 2005

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 4188/2004-05/ಪಿಎಸ್‌ಸಿ ದಿನಾಂಕ: 15.03.2005 ರಲ್ಲಿ ಪ್ರಕಟಿಸಲಾಗಿರುವ 2004ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಮಂಡ್ಯ ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಎ' ರ ಅಡಿಯಲ್ಲಿ ಅಕೌಂಟ್ಸ್ ಹೈಯರ್ ವಿಷಯದ ಶೀರ್ಷಿಕೆಯ ಕೆಳಗೆ ಸಾಮಾನ್ಯ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 30015ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,
ಪಿ.ಆರ್.222 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್" ಬೆಂಗಳೂರು
### ತಿದ್ದುಪಡಿ ಸಂಖ್ಯೆ: ಇ.ಪ.(1)616/2005-06/ಪಿಎಸ್‌ಸಿ ದಿನಾಂಕ: 21ನೇ ಏಪ್ರಿಲ್ 2005

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 4188/2004-05/ಪಿಎಸ್‌ಸಿ ದಿನಾಂಕ:15.03.2005 ರಲ್ಲಿ ಪ್ರಕಟಿಸಲಾಗಿರುವ 2004ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಬೆಳಗಾಂ ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಬಿ' ರ ಅಡಿಯಲ್ಲಿ ಎಸ್.ಎ.ಎಸ್. ಭಾಗ-3ರ ವಿಷಯದ ಕೆಳಗೆ ಇರುವ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 100295ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,
ಪಿ.ಆರ್.224 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಕರ್ನಾಟಕ ಲೋಕಸೇವಾ ಆಯೋಗ
## ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್" ಬೆಂಗಳೂರು
### ತಿದ್ದುಪಡಿ ಸಂಖ್ಯೆ: ಇ.ಪ.(2)59/2005-06/ಪಿಎಸ್‌ಸಿ ದಿನಾಂಕ: 5ನೇ ಏಪ್ರಿಲ್ 2005

ದಿನಾಂಕ: 15.03.2005 ರಂದು ಆಯೋಗದಿಂದ ಪ್ರಕಟಿಸಲಾಗಿರುವ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಬಿ' ಶೀರ್ಷಿಕೆಯಡಿಯಲ್ಲಿ ಜನರಲ್ ಲಾ ಭಾಗ-1ರಡಿ ಇರುವ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 6746ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ,
ಪಿ.ಆರ್.226 ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು, ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.

**FORM-IV**
**(See Rule 12)**
**NOTICE**

It is hereby notified that the undersigned has changed his/her name from **K. MARI RANGE GOWDA** to **K. RAMESH GOWDA**

PD-55 **K. RAMESH GOWDA**

## ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

### ಟೆಂಡರು ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)

### ನಂ: ಜಿಎನ್‌ಎಲ್:ಟಿಎನ್‌ಡಿ:ಯುಡಿಎನ್:2005-2006/ಜೇ೪ ದಿನಾಂಕ: 12ನೇ ಏಪ್ರಿಲ್ 2005

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆಕ್ಟ್ 2000ದ ಪ್ರಕಾರ ದ್ವಿಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್‌ನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡೂ ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡ್‌ದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2 ರ ಫಾರಂ ನಂ ಪಿಡಬ್ಲ್ಯೂಜಿ 65 ಹಾಗೂ 66ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆಕ್ಟ್ 2000ದಲ್ಲಿ ನಿರೂಪಿತ ಶರ್ತಗಳಿಗೊಳಪಟ್ಟು, ದಿನಾಂಕ: 12.05.2005 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು ಲೋ.ಇ ಉಡುಪಿ ವಿಭಾಗ ಉಡುಪಿ ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು.

ಈ ಕೆಳಗೆ ಸೂಚಿತ ಯಾವುದಾದರೊಂದು ದಿನಾಂಕ ಸಾರ್ವತ್ರಿಕ ರಜಾದಿನವಾದಲ್ಲಿ ಮುಂದಿನ ಅನೂಕೂಲಕರ ದಿನ ತಿಳಿಸಲಾಗುವುದು.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಮೊಬಲಗು (ರೂ.ಲಕ್ಷಗಳಲ್ಲಿ) | ಇಎಂಡಿ (ರೂ.ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಕುಂದಾಪುರ ತಾಲ್ಲೂಕು, ಕಮಲಶಿಲೆ ಯಡಮೊಗ್ಗೆ ಹೊಸಂಗಡಿ ರಸ್ತೆ ಅಭಿವೃದ್ಧಿ | 63.00 | 63000.00 | 10 ತಿಂಗಳು | ಐಟಂವಾರು | ರೂ.4400/- | 1ನೇ ದರ್ಜೆ |
| 2. | ಕುಂದಾಪುರ ತಾಲ್ಲೂಕು, ವಂಡ್ಸೆ - ಬೆಳ್ಳಾಲ ರಸ್ತೆ ಅಭಿವೃದ್ಧಿ | 63.00 | 63000.00 | 10 ತಿಂಗಳು | ಐಟಂವಾರು | ರೂ.4400/- | 1ನೇ ದರ್ಜೆ |

**ಸಾಮಾನ್ಯ ನಿಯಮಗಳು:**

1) ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಉಡುಪಿಯಲ್ಲಿ ಪಾವತಿ ಆಗುವಂತೆ ಕಾರ್ಯಪಾಲಕ ಅಭಿಯಂತರರು ಉಡುಪಿ ವಿಭಾಗ ಉಡುಪಿ ಅವರ ಹೆಸರಿಗೆ ಪಡೆದ ಡಿಡಿ ರೂಪದಲ್ಲಿ, ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳಸಹಿದಾರರಿಗೆ ಅರ್ಜಿಸಲ್ಲಿಸಬೇಕು. ಅರ್ಜಿದಾರರು ನೋಂದಣಿ ಪುರಾವೆ, ಹಿಂದಿನ 5 ವಿತ್ತ ವರ್ಷಗಳ ಬ್ಲಾಕ್ ಅವಧಿಯ ಯಾವುದಾದರೊಂದು ವಿತ್ತ ವರ್ಷದಲ್ಲಿ ಕೆಲಸದ ಮೌಲ್ಯದ ಶೇ. 30ಕ್ಕಿಂತ ಕಡಿಮೆಯಿಲ್ಲದ ಮೌಲ್ಯದ ಅಂತಹುದೇ ಸ್ವಭಾವದ ಕಾಮಗಾರಿಗಳನ್ನು ಪೂರೈಸಿದ ಬಗ್ಗೆ ಅರ್ಹತಾ ಪ್ರಮಾಣಪತ್ರ ಸಲ್ಲಿಸಬೇಕು. ಟೆಂಡರ್ ಶೆಡ್ಯೂಲ್‌ಗಳಿಗೆ ಅರ್ಜಿ ಸಲ್ಲಿಸುವಾಗ ಸಂಬಂಧಪಟ್ಟ ಇಲಾಖೆಯಿಂದ ಪಡೆದ ಇತ್ತೀಚಿನ ಆದಾಯ ತೆರಿಗೆ ಕ್ಲೀಯರೆನ್ಸ್ ಪ್ರಮಾಣಪತ್ರ ಸಲ್ಲಿಸಬೇಕು ಹಾಗಿಲ್ಲದಿದ್ದರೆ ಅರ್ಜಿ ಪರಿಗಣಿಸಲಾಗುವುದಿಲ್ಲ.
2) ದಿನಾಂಕಗಳ ತಪಶೀಲು ಹೀಗಿದೆ (Time Schedule)
   - ಎ) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 02.05.2005 ರಂದು ಕೆಲಸದ ವೇಳೆಯಲ್ಲಿ
   - ಬಿ) ಖಾಲಿ ಟೆಂಡರ್ ಶೆಡ್ಯೂಲ್‌ಗಳನ್ನು ನೀಡುವ ದಿನಾಂಕ: 06.05.2005 ಮತ್ತು 07.05.2005 ರಂದು ಕೆಲಸದ ವೇಳೆಯಲ್ಲಿ
   - ಸಿ) ತಾಂತ್ರಿಕ ಹಾಗೂ ವಿತ್ತೀಯ ಬಿಡ್ ಸಲ್ಲಿಸುವ ಕಡೆಯ ದಿನಾಂಕ: 12.05.2005 ರಂದು ಸಂಜೆ 4.00 ಗಂಟೆ ರವರೆಗೆ
   - ಡಿ) ತಾಂತ್ರಿಕ ಬಿಡ್ ತೆರೆಯುವಿಕೆ ದಿನಾಂಕ: 12.05.2005 ರಂದು ಸಂಜೆ 5.00ಕ್ಕೆ ಅಥವಾ ಕಾಲಕ್ರಮೇಣ ತಿಳಿಸಲಾಗುವ ಬೇರಾವುದೇ ದಿನಾಂಕ ಹಾಗೂ ವೇಳೆ

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು, ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ರಾಷ್ಟ್ರೀಕೃತ ಯಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್/ ಕಾಲ್‌ಡೆಪೋಸಿಟ್, ಡಿಡಿ ಬ್ಯಾಂಕ್‌ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಬೇಕು) ಇಎಂಡಿಯನ್ನು ತಾಂತ್ರಿಕ ಬಿಡ್‌ಗೆ ಲಗ್ತೀಕರಿಸಬೇಕು. ಬ್ಯಾಂಕ್‌ಗ್ಯಾರಂಟಿ, ಟೆಂಡರ್ ನಮೂನೆಯಲ್ಲಿ ಪೂರೈಸಿದ ಪಿಡಬ್ಲ್ಯೂಜಿ-66 ರಲ್ಲಿ ನಿರೂಪಿತ ನಮೂನೆಯಲ್ಲಿರಬೇಕು. ಹಾಗಿಲ್ಲದಿದ್ದರೆ ಟೆಂಡರನ್ನು ತಿರಸ್ಕರಿಸಲಾಗುವುದು.

3) ಈ ಅಧಿಸೂಚನೆಯಲ್ಲಿ ಕಾಮಗಾರಿಯ ದುರಸ್ತಿ ಅವಧಿ (ಡಿಫೆಕ್ಟ್ ಲಯಾಬಿಲಿಟಿ ಪಿರಿಯಡ್) ಕೆಲಸ ಪೂರೈಸಿದ ದಿನಾಂಕದಿಂದ ಗುರುತಿಸಲಾಗುವಂತೆ ಒಂದು ವರ್ಷ. ಕಾರ್ಯಗತಗೊಳಿಸಬೇಕಾದ ಕಾಮಗಾರಿಗಳಲ್ಲಿ ಬಳಸುವ ಸಾಮಗ್ರಿಗಳು ಉತ್ತಮ ಗುಣಮಟ್ಟದ್ದಾಗಿರಬೇಕು. ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಒಂದು ವರ್ಷಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚೈನೇಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾದರೂ ದುರಸ್ತಿಬೇಕಾದರೆ, ಗುತ್ತಿಗೆದಾರ/ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.

4) ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೆ ನೀಡಬೇಕು.

5) ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಝೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು, ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹತೆಗೊಳ್ಳುತ್ತದೆ.

6) ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲವೆಂಟ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪನಿ/ಏಜೆನ್ಸಿಗಳು/ವಾಣಿಜ್ಯ ಸಂಸ್ಥೆಗಳ ಅದರ/ ಅವುಗಳ ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.

7) ಶರ್ತ ಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

8) ಈ ಮೇಲಿನ ರಸ್ತೆ ಕೆಲಸವನ್ನು ಎಂ.ಒ.ಆರ್.ಟಿ.ಎಚ್. ಮಾದರಿ ಪ್ರಕಾರವಿರುವ ಪೇವರ್‌ಯುಕ್ತವಾದ (paver finish) ಹಾಟ್ ಮಿಕ್ಸ್‌ನಿಂದ ಮಾತ್ರ ನಿರ್ವಹಿಸಬೇಕು. ತಪ್ಪಿದಲ್ಲಿ ಇಲಾಖಾ ನಿಯಮಗಳ ರೀತ್ಯಾ ಕ್ರಮ ಕೈಗೊಳ್ಳಲಾಗುತ್ತದೆ.

9) ನಿಗದಿತ ಅವಧಿಯೊಳಗೆ ಕೆಲಸ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರೆಬೇಕಾಗುತ್ತದೆ.

10) ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಸ್ವತಃ ಒದಗಿಸಿಕೊಳ್ಳತಕ್ಕದ್ದು ಇದನ್ನು ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.

11) ಪ್ರತಿ ಟೆಂಡರುದಾರರು ರಸ್ತೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲಿಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1. | ಹಾಟ್‌ಮಿಕ್ಸ್ ಪ್ಲಾಂಟ್ 40/60 ಟಿಪಿಹೆಚ್ ಯಾ ಹೆಚ್ಚಿನ ಸಾಮರ್ಥ್ಯದಲ್ಲಿ (ಎಂ.ಒ.ಆರ್.ಟಿ.ಹೆಚ್.ಮಾದರಿ ಪ್ರಕಾರ) | 1 | ಪರ್ಚೇಸ್ ಇನ್‌ವಾಯ್ಸ್/ಸೇಲ್‌ಡೀಡ್/ ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2. | ಪೇವರ್ ಫಿನಿಷರ್ | 1 | ..................... ಅದೇ.................... |
| 3. | ವೈಬ್ರೇಟರ್ ರೋಡ್ ರೋಲರ್ | 1 | ..................... ಅದೇ.................... |
| 4. | ಸ್ಟಾಟಿಕ್ ರೋಡ್ ರೋಲರ್ | 2 | ..................... ಅದೇ.................... |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | 2 | ..................... ಅದೇ.................... |
| 6. | ಏರ್ ಕಂಪ್ರೆಸರ್ | 2 | ..................... ಅದೇ.................... |
| 7. | ಟಿಪ್ಪರ್ | 4 | ಆರ್.ಟಿ.ಓ. ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ |

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

ಕಾರ್ಯಪಾಲಕ ಇಂಜಿನಿಯರ್,
ಲೋ.ಇ ಉಡುಪಿ ವಿಭಾಗ, ಉಡುಪಿ.

ಪಿ.ಆರ್.211

## ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

## ಟೆಂಡರು ಪ್ರಕಟಣೆ

### ನಂ: ಜಿಎನ್‌ಎಲ್:ಟಿಎನ್‌ಡಿ:ಯುಡಿಎನ್:2005-2006/ಜೆ೪ ದಿನಾಂಕ: 12ನೇ ಏಪ್ರಿಲ್ 2005

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹದರ್ಜೆಯ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್ಮೆಂಟ್ ಆ್ಯಕ್ಟ್ 2000ದ ಪ್ರಕಾರ ಐಟಂವಾರು ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಪೂರ್ತಿಗೊಳಿಸಿದ ಟೆಂಡರ್‌ನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2ರ ಫಾರಂ ನಂ. ಪಿಡಬ್ಲೂಜಿ 65 ಹಾಗೂ 66 ರಲ್ಲಿ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆ್ಯಕ್ಟ್ 2000ದಲ್ಲಿ ನಿರೂಪಿತ ಶರ್ತಗಳಿಗೊಳಪಟ್ಟು ದಿನಾಂಕ 12.05.2005 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು ಲೋಕೋಪಯೋಗಿ ಇಲಾಖೆ ಉಡುಪಿ ವಿಭಾಗ ಉಡುಪಿ ಇವರು ಸ್ವೀಕರಿಸುವರು.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಲಕ್ಷಗಳಲ್ಲಿ) | ಇಎಂಡಿ (ರೂ.ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಉಡುಪಿ ತಾಲೂಕು, ಹಳುವಳ್ಳಿ-ಕನ್ನಾರು-ಸಾಸ್ತಾನ ಅಮ್ಮನವರ ಕಟ್ಟೆ- ಬೆನೆಗಲ್ ರಸ್ತೆ ಅಭಿವೃದ್ಧಿ | 38.00 | 38000.00 | 6 ತಿಂಗಳು | ದರವಾರು | ರೂ. 3300/- | 1ನೇ ದರ್ಜೆ |
| 2. | ಉಡುಪಿ ತಾಲೂಕು, ಕೋಡಿ-ಕನ್ಯಾನ-ಸಾಸ್ತಾನ ರಸ್ತೆ ಅಭಿವೃದ್ಧಿ | 11.40 | 17200.00 | 4 ತಿಂಗಳು | ದರವಾರು | ರೂ. 1650/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 3. | ಉಡುಪಿ ತಾಲೂಕು, ಕಡಲ್‌ವಿಠಲ್ ಮುಗ್ಗೇರ್ಕಳ ರಸ್ತೆ ಅಭಿವೃದ್ಧಿ | 48.00 | 48000.00 | 8 ತಿಂಗಳು | ದರವಾರು | ರೂ. 3300/- | 1ನೇ ದರ್ಜೆ |
| 4. | ಉಡುಪಿ ತಾಲೂಕು, ಸುಭಾಸ್‌ನಗರ- ಮಣಿಪುರ ಕೊಂಡಿ ರಸ್ತೆ ಅಭಿವೃದ್ಧಿ | 20.00 | 20000.00 | 6 ತಿಂಗಳು | ದರವಾರು | ರೂ. 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 5. | ಕುಂದಾಪುರ ತಾಲೂಕು, ಹುಣ್ಸೆಮಕ್ಕಿ ಬೇಳೂರು ರಸ್ತೆ ಅಭಿವೃದ್ಧಿ | 33.00 | 33000.00 | 6 ತಿಂಗಳು | ದರವಾರು | ರೂ. 3300/- | 1ನೇ ದರ್ಜೆ |
| 6. | ಕುಂದಾಪುರ ತಾಲೂಕು, ಬೇಳೂರು ಗ್ರಾಮದಲ್ಲಿ ಹಳ್ಳಕ್ಕೆ ಅಡ್ಡಲಾಗಿ ಸೇತುವೆ ನಿರ್ಮಾಣ | 20.50 | 20500.00 | 6 ತಿಂಗಳು | ದರವಾರು | ರೂ. 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 7. | ಕುಂದಾಪುರ ತಾಲೂಕು, ಹಾಲಾಡಿ- ಚೋರಾಡಿ ರಸ್ತೆ ಅಭಿವೃದ್ಧಿ | 13.40 | 20100.00 | 4 ತಿಂಗಳು | ದರವಾರು | ರೂ.1650/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 8. | ಕುಂದಾಪುರ ತಾಲೂಕು, ಬೆಳ್ವೆ-ಹೆಂಗವಳ್ಳಿ ರಸ್ತೆ ಅಭಿವೃದ್ಧಿ | 23.60 | 23600.00 | 6 ತಿಂಗಳು | ದರವಾರು | ರೂ.2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 9. | ಕುಂದಾಪುರ ತಾಲೂಕು, ಕಕ್ಕುಂಜೆಯಾಗಿ ಗಾವಳಿಯಿಂದ ಬೋರ್ಡಕಲ್ಲು ಗೋಳಿಯಂಗಡಿಗೆ ಸೇರುವ ರಸ್ತೆ ಅಭಿವೃದ್ಧಿ | 23.60 | 23600.00 | 6 ತಿಂಗಳು | ದರವಾರು | ರೂ.2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು |

**ಸಾಮಾನ್ಯ ನಿಯಮಗಳು:**

1) ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಉಡುಪಿಯಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು ಉಡುಪಿ ವಿಭಾಗ ಉಡುಪಿ ಅವರ ಹೆಸರಿಗೆ ಪಡೆದ ಡಿಡಿ ರೂಪದಲ್ಲಿ ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳಸಹಿದಾರರಿಗೆ ಅರ್ಜಿಜೊತೆ ಗುತ್ತಿಗೆದಾರರ ರಿಜಿಸ್ಟ್ರೇಶನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು.

2) ಅರ್ಜಿದಾರರು ನೋಂದಣಿ ಪುರಾವೆ ಹಿಂದಿನ 5 ವಿತ್ತ ವರ್ಷಗಳ ಬ್ಲಾಕ್ ಅವಧಿಯ ಯಾವುದಾದರೊಂದು ವಿತ್ತ ವರ್ಷದಲ್ಲಿ ಕೆಲಸದ ಮೌಲ್ಯದ ಶೇ. 30ಕ್ಕಿಂತ ಕಡಿಮೆಯಿಲ್ಲದ ಮೌಲ್ಯದ ಅಂತಹುದೇ ಸ್ವಭಾವದ ಕಾಮಗಾರಿಗಳನ್ನು ಪೂರೈಸಿದ ಬಗ್ಗೆ ಅರ್ಹತಾ ಪ್ರಮಾಣಪತ್ರ ಸಲ್ಲಿಸಬೇಕು.

3) ಟೆಂಡರ್ ಶೆಡ್ಯೂಲ್‌ಗಳಿಗೆ ಅರ್ಜಿಸಲ್ಲಿಸುವಾಗ ಸಂಬಂಧಪಟ್ಟ ಇಲಾಖೆಯಿಂದ ಪಡೆದ ಇತ್ತೀಚಿನ ಆದಾಯ ತೆರಿಗೆ ಕ್ಲೀಯರೆನ್ಸ್ ಪ್ರಮಾಣಪತ್ರ ಹಾಗೂ ಮಾರಾಟ ತೆರಿಗೆ ಕ್ಲೀಯರೆನ್ಸ್ ಪ್ರಮಾಣಪತ್ರ ಸಲ್ಲಿಸಬೇಕು ಹಾಗಿಲ್ಲದಿದ್ದರೆ ಅರ್ಜಿ ಪರಿಶೀಲಿಸಲಾಗುವುದಿಲ್ಲ.

4) ದಿನಾಂಕಗಳ ತಪಶೀಲು ಹೀಗಿದೆ (Time Schedule)

ಎ) ಅರ್ಜಿಸ್ವೀಕರಿಸುವ ಕೊನೆಯ ದಿನಾಂಕ : 02.05.2005 ರಂದು ಕೆಲಸದ ವೇಳೆಯಲ್ಲಿ

ಬಿ) ಖಾಲಿ ಟೆಂಡರ್ ಶೆಡ್ಯೂಲ್‌ಗಳನ್ನು ನೀಡುವ ದಿನಾಂಕ : 06.05.2005 ಮತ್ತು 7.05.2005 ರಂದು ಕೆಲಸದ ವೇಳೆಯಲ್ಲಿ

ಸಿ) ಟೆಂಡರ್ ಸ್ವೀಕರಿಸುವ ದಿನಾಂಕ : 12.05.2005 ರಂದು ಸಂಜೆ 4.00 ಗಂಟೆಯವರೆಗೆ

**ಸೂಚನೆಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು, ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.

2) ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್‌ಡಿಆರ್/ ಕಾಲ್‌ಡೆಪೋಸಿಟ್, ಡಿಡಿ ಬ್ಯಾಂಕ್‌ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

3) ಈ ಅಧಿಸೂಚನೆಯಲ್ಲಿ ಕಾಮಗಾರಿಯ ದುರಸ್ತಿ ಅವಧಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಕೆಲಸ ಪೂರೈಸಿದ ದಿನಾಂಕದಿಂದ ಗುರುತಿಸಲಾಗುವಂತೆ ಒಂದು ವರ್ಷ ಕಾರ್ಯಗತಗೊಳಿಸಬೇಕಾದ ಕಾಮಗಾರಿಗಳಲ್ಲಿ ಬಳಸುವ ಸಾಮಗ್ರಿಗಳು ಉತ್ತಮ ಗುಣಮಟ್ಟದ್ದಾಗಿರಬೇಕು. ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಒಂದು ವರ್ಷಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು/ ಕಿ.ಮೀ (ಸ್ಟ್ರೆಚ್‌ಗೆ)ಕ್ಕೆ ಈ ಮೇಲಿನಂತೆ ಡಿಫೆಕ್ಟ್ ಲಯಾಬಿಲಿಟಿ ಅವಧಿಯಲ್ಲಿ ಯಾವೂದಾರೂ ದುರಸ್ತಿಬೇಕಾದರೆ, ಗುತ್ತಿಗೆದಾರ/ ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.

4) ಶರ್ತಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

5) ಈ ಮೇಲಿನ ರಸ್ತೆ ಕೆಲಸವನ್ನು ಎಂ.ಒ.ಆರ್.ಟಿ.ಎಚ್. ಮಾದರಿ ಪ್ರಕಾರವಿರುವ ಪೇವರ್‌ಯುಕ್ತವಾದ (paver finish) ಹಾಟ್ ಮಿಕ್ಸ್‌ನಿಂದ ಮಾತ್ರ ನಿರ್ವಹಿಸಬೇಕು. ತಪ್ಪಿದಲ್ಲಿ ಇಲಾಖಾ ನಿಯಮಗಳ ರೀತ್ಯಾ ಕ್ರಮ ಕೈಗೊಳ್ಳಲಾಗುತ್ತದೆ.

6) ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.

7) ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.

8) ಪ್ರತಿ ಟೆಂಡರುದಾರು ರಸ್ತೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲಿಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | 2 | 3 | 4 |
| 1. | ಹಾಟ್‌ಮಿಕ್ಸ್ ಪ್ಲಾಂಟ್ 40/60 ಟಿಪಿಹೆಚ್ ಯಾ ಹೆಚ್ಚಿನ ಸಾಮರ್ಥ್ಯದಲ್ಲಿ (ಎಂ.ಒ.ಆರ್.ಟಿ.ಹೆಚ್. ಮಾದರಿ ಪ್ರಕಾರ) | 1 | ಪರ್ಚೇಸ್ ಇನ್‌ವಾಯ್ಸ್/ಸೇಲ್‌ಡೀಡ್/ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2. | ಪೇವರ್ ಫಿನಿಷರ್ | 1 | ..................... ಅದೇ.................... |
| 3. | ವೈಬ್ರೇಟರ್ ರೋಡ್ ರೋಲರ್ | 1 | ..................... ಅದೇ.................... |
| 4. | ಸ್ಟಾಟಿಕ್ ರೋಡ್ ರೋಲರ್ | 1 | ..................... ಅದೇ.................... |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | 2 | ..................... ಅದೇ.................... |
| 6. | ಟಿಪ್ಪರ್ | 3 | ಆರ್.ಟಿ.ಓ ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ |
| 7. | ಏರ್ ಕಂಪ್ರೆಸರ್ | 1 | ಮಾರಾಟಗಾರರಿಂದ ಪರ್ಚೇಸ್ ಇನ್‌ವಾಯ್ಸ್ ಪ್ರತಿಯೊಂದಿಗೆ ಪರ್ಚೇಸ್ ಇನ್‌ವಾಯ್ಸ್/ ಸೇಲ್‌ಡೀಡ್‌ನ ಪ್ರತಿ |

9) ಪ್ರತಿ ಟೆಂಡರುದಾರರು ಸೇತುವೆ ಕೆಲಸಕ್ಕೆ ಕೆಳಗೆ ತಿಳಿಸಿದಂತೆ ಈ ಕೆಳಗಿನ ಯಂತ್ರಗಳನ್ನು ಸ್ವಂತ ಹೊಂದಿದ್ದು ತಾಂತ್ರಿಕ ಬಿಡ್‌ನೊಂದಿಗೆ ಮಾಲಿಕತ್ವದ ಪುರಾವೆ ಸಹಿತ ಲಗ್ತೀಕರಿಸಬೇಕು. ಮೇಲೆ ತಿಳಿಸಿದ ಪ್ರಕಾರ ಮಾಲಿಕತ್ವದ ಪುರಾವೆ ರಹಿತವಾಗಿ ದೊರೆತ ಟೆಂಡರನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | 2 | 3 | 4 |
| 1. | ಎಂಜಿನ್ ಮೌಂಟೆಡ್ ಕಾಂಕ್ರೀಟ್ ಮಿಕ್ಸರ್ | 2 | ಪರ್ಚೇಸ್ ಇನ್‌ವಾಯ್ಸ್/ಸೇಲ್‌ಡೀಡ್/ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2. | ಪಿನ್ ಎಂಡ್ ಸ್ಪೀಡ್ ವೈಬ್ರೇಟರ್ಸ್ | 2 | ..................... ಅದೇ.................... |
| 3. | ಇಲೆಕ್ಟ್ರಿಕಲ್ ಜನರೇಟರ್ | 1 | ..................... ಅದೇ.................... |
| 4. | ಸೆಂಟರ್ ಫ್ಯುಗಲ್ ಪಂಪ್ (ಕೇಂದ್ರ ಹಂಗಾಮಿ) | 2 | ..................... ಅದೇ.................... |
| 5. | ಟಿಪ್ಪರ್‌ಗಳು | 2 | ಆರ್.ಟಿ.ಓ ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ |
| 6. | ರೋಡ್ ರೋಲರ್‌ಗಳು | 1 | ಮಾರಾಟಗಾರರಿಂದ ಪರ್ಚೇಸ್ ಇನ್‌ವಾಯ್ಸ್ ಪ್ರತಿಯೊಂದಿಗೆ ಪರ್ಚೇಸ್ ಇನ್‌ವಾಯ್ಸ್/ಸೇಲ್‌ಡೀಡ್‌ನ ಪ್ರತಿ |
| 7. | ಸ್ಟೀಲ್ ಫೋರಮ್ ವರ್ಕ್ (Steel form work) | 400 ಚ.ಮೀ | ..................... ಅದೇ.................... |
| 8. | ಸೆಂಟರಿಂಗ್ ಶೀಟ್ಸ್ (Sheets) | 500 ಚ.ಮೀ | ..................... ಅದೇ.................... |
| 9. | ಟ್ರಾಕ್ಟರ್ ಮೌಂಟೆಡ್ ಕಂಪ್ರೆಸರ್ | 1 | ..................... ಅದೇ.................... |

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

**ಕೆ. ಸುರೇಶ್‌ಶೆಟ್ಟಿ**

ಪಿ.ಆರ್.212 ಕಾರ್ಯಪಾಲಕ ಇಂಜಿನಿಯರರು, ಲೋ.ಇ ಉಡುಪಿ ವಿಭಾಗ, ಉಡುಪಿ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ, ಲೋ.ಇ.ವಿಭಾಗ, ಶಿವಮೊಗ್ಗ ವೃತ್ತ, ಶಿವಮೊಗ್ಗ

## ಟೆಂಡರ್ ಪ್ರಕಟಣೆ (ದ್ವಿ-ಲಕೋಟೆ ಪದ್ಧತಿ)

## ಟೆಂಡರ್ ಪ್ರಕಟಣೆ ಸಂಖ್ಯೆ: ಕಾಅ: ಶಿವಿಶಿ: ಎಇ-2/ ರಸ್ತೆ ಮತ್ತು ಸೇತುವೆ/2/2005-06/94 ದಿನಾಂಕ: 11ನೇ ಏಪ್ರಿಲ್ 2005

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ.ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್., ಬ್ಯಾಂಕ್ ಗ್ಯಾರಂಟಿ (ಕನಿಷ್ಠ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

**ನಿಬಂಧನೆಗಳು:**

1. ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ: ನಂ. ಪಿಡಬ್ಲ್ಯೂಡಿ 344 ಸಿ.ಆರ್.ಎಮ್ 2000 ದಿನಾಂಕ: 15.1.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.

